ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಬೈಯಪ್ಪನಹಳ್ಳಿ ರೈಲು ನಿಲ್ದಾಣದಲ್ಲಿನ ಹೊಸ ಟರ್ಮಿನಲ್‌ಗೆ ತಲುಪುವ ಸುತ್ತಮುತ್ತಲಿನ ರಸ್ತೆಗಳ ಅಭಿವೃದ್ಧಿ ಬಗ್ಗೆ

ಶ್ರೀ ಕೆ. ಗೋವಿಂದರಾಜ್(ವಿಧಾನಸಭೆಯಿಂದ ಚುನಾಯಿತರಾದವರು) –

449 (610) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಬೆಂಗಳೂರು ನಗರ ಬೈಯಪ್ಪನಹಳ್ಳಿ ರೈಲು ನಿಲ್ದಾಣದಲ್ಲಿ ನಿರ್ಮಿಸಲಾಗಿದ್ದ ಟರ್ಮಿನಲ್ ಸ್ಟೇಷನ್‌ಗೆ ಹೋಗುವ ರಸ್ತೆಗಳು ಅತಿ ಚಿಕ್ಕದಾಗಿದ್ದು ಹಾಗೂ ಅಭಿವೃದ್ಧಿಯೂ ಆಗಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಇದರಿಂದಾಗಿ ಇಂದಿರಾನಗರ, ಕೆ.ಆರ್.ಪುರಂ, ದೊಮ್ಮಲೂರು, ಕೋರಮಂಗಲ, ರಾಮಮೂರ್ತಿ ನಗರ, ಮಾರುತಿ ಸೇವಾ ನಗರ ಮುಂತಾದ ಬಡಾವಣೆಗಳ ಪ್ರಯಾಣಿಕರು ಅತಿ ಚಿಕ್ಕ ಹಾಗೂ ಮಣ್ಣಿನಿಂದ ಕೂಡಿದ ಕುಲುಕುವ ರಸ್ತೆಗಳಲ್ಲಿ ಕಷ್ಟಕರವಾಗಿ ಪ್ರಯಾಣಿಸಿ, ಸದರಿ ಟರ್ಮಿನಲ್ ಅನ್ನು ತಲುಪಬೇಕಾಗಿದ್ದು ಇದರಿಂದ ಟ್ರಾಫಿಕ್ ಜಾಮ್, ಧೂಳು ಸೇವನೆ ಮುಂತಾದ ಅನಾನುಕೂಲಗಳನ್ನು ಪ್ರಯಾಣಿಕರು ಎದುರಿಸಬೇಕಾಗಿರುವುದರಿಂದ ಈ ಪ್ರಯಾಣಿಕರ ಭವಣೆಯನ್ನು ನಿವಾರಿಸಲು ಸರ್ಕಾರ ತೆಗೆದುಕೊಳ್ಳುವ ಯೋಜನೆಗಳೇನು?